KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೧೬, ೨೦೦೬ (ಫಾಲ್ಗುಣ ೨೫, ಶಕ ವರ್ಷ ೧೯೨೭) | ಸಂಚಿಕೆ ೧೧ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಶಿರಹಟ್ಟಿ, ಗದಗ ಜಿಲ್ಲೆ

**ಸಂಖ್ಯೆ: ತಾಸಕಅಶಿ:ಆಡಳಿತ:ಮಾಪಹ:ಪಿಆರ್-26:2005-06/1236, ದಿನಾಂಕ: 15ನೇ ಫೆಬ್ರವರಿ 2006**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಮಾನ್ಯ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಸಕನಿ:ಕುಂಕೊ:ಸಿಆರ್ 242:2005-06, ದಿನಾಂಕ: 16.01.2006.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005ರ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2005 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸೆಕ್ಷನ್ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು. |

ಕರ್ನಾಟಕ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದ್ದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯ ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಇಲಾಖೆಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1 | ಕಛೇರಿ ಅಧೀಕ್ಷಕರು | 1 ಹುದ್ದೆ |
| 2 | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3 | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4 | ಬೆರಳಚ್ಚುಗಾರರು | 1 ಹುದ್ದೆ |
| 5 | ಗ್ರೂಪ್ 'ಡಿ' ನೌಕರರು | 1 ಹುದ್ದೆ |

**ಇಲಾಖೆಯ ಅಧೀನದಲ್ಲಿ ನಡೆಯುತ್ತಿರುವ ಸಂಸ್ಥೆಗಳ ವಿವರ**

1) ಸರ್ಕಾರಿ ಸಾರ್ವಜನಿಕ ಬಾಲಕರ ವಸತಿ ನಿಲಯ ಶಿರಹಟ್ಟಿ.
2) ಸರ್ಕಾರಿ ಸಾರ್ವಜನಿಕ ಬಾಲಕರ ವಸತಿ ನಿಲಯ ಕಡಕೊಳ.
3) ಸರ್ಕಾರಿ ಸಾರ್ವಜನಿಕ ಬಾಲಕೀಯರ ವಸತಿ ನಿಲಯ ಶಿರಹಟ್ಟಿ.
4) ಸರ್ಕಾರಿ ಸಾರ್ವಜನಿಕ ಬಾಲಕರ ವಸತಿ ನಿಲಯ, ಬನ್ನಿಕೊಪ್ಪ
5) ಸರ್ಕಾರಿ ಸಾರ್ವಜನಿಕ ಬಾಲಕರ ವಸತಿ ನಿಲಯ, ಬಾಲೇಹೊಸೂರ.

6) ಸರ್ಕಾರಿ ಸಾರ್ವಜನಿಕ ಬಾಲಕರ ವಸತಿ ನಿಲಯ, ಸೂರಣಗಿ.
7) ಶ್ರೀ ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ, (ಒಡೆಯರ ಮಲ್ಲಾಪೂರ) ಲಕ್ಷ್ಮೇಶ್ವರ.
8) ಸರ್ಕಾರಿ ಆಶ್ರಮಶಾಲೆ, ನವೇಭಾವನೂರ.
9) ಸರ್ಕಾರಿ ಆಶ್ರಮಶಾಲೆ, ಶಿಗ್ಲಿ.
10) ಮಹಿಳಾ ಕಲ್ಯಾಣ ಕೇಂದ್ರ, ಲಕ್ಷ್ಮೇಶ್ವರ.
11) ಹೊಲಿಗೆ ತರಬೇತಿ ಕೇಂದ್ರ, ಲಕ್ಷ್ಮೇಶ್ವರ.

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ:ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾನೂನು ಪಧವೀದರರಿಗೆ ಧನ ಸಹಾಯ.
2. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು.
3. ಕಟ್ಟಡಗಳ ನಿರ್ವಹಣೆ.
4. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯ ವೇತನ.
5. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಹಣ.
6. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.
7. ಪ್ರತಿಭಾ ವಿದ್ಯಾರ್ಥಿ ವೇತನ.
8. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು.
9. ಪ.ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ (ಸಿ.ಎಸ್.ಎಸ್.)
10. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿ.ವೇತನ.
11. 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ.
12. ಅಸ್ಪೃಶ್ಯತಾ ನಿವಾರಣೆ.
13. ದೌರ್ಜನ್ಯಕ್ಕೆ ಒಳಪಟ್ಟ ಪ.ಜಾತಿಯವರಿಗೆ ಪರಿಹಾರಧನ.
14. ಜಾತಿ ಪರಿಶೀಲನೆ (ಜಾತಿ ಸಿಂಧುತ್ವ).
15. ಅಂಬೇಡ್ಕರ ವಸತಿ ಯೋಜನೆ.
16. ಆಶ್ರಯ ವಸತಿ ಯೋಜನೆ.
17. ಸರ್ಕಾರಿ ಆಶ್ರಮ ಶಾಲೆಗಳು.
18. ಶ್ರೀ ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ.
19. ವಿಶೇಷ ಘಟಕ ಯೋಜನೆಗಳು.
20. ಗಿರಿಜನ ಉಪಯೋಜನೆ.

**(2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು:** ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**(3) ಕಛೇರಿ ಸಿಬ್ಬಂದಿಯವರು ಕರ್ತವ್ಯ ನಿರ್ವಹಣೆ ವಿವರಗಳು:** ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುತ್ತಿರುವರು.

ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿಯ ಕೈಪಿಡಿ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**(3) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿವಸ ವಿಷಯ ನಿರ್ವಾಹಕರಿಗೆ ನೀಡುವಂತೆ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥ ಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.

5) ಸರ್ಕಾರವು ಮೇಲಾಧಿಕಾರಿಗಳು, ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತ ಗತಿಯಲ್ಲಿ ಪಾಲಿಸುವುದು.

6) ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**(4) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

2) ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.

3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಘ.ಯೋ) ಅವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರ ಹಾಗೂ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.

4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾದ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು,
ಶಿರಹಟ್ಟಿ ತಾಲ್ಲೂಕು, ಗದಗ್ ಜಿಲ್ಲೆ.

ಪಿ.ಆರ್. 569

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:2:ಸಿಆರ್‌ಎಂ:158:2003-04, ದಿನಾಂಕ: 20ನೇ ಫೆಬ್ರವರಿ 2006**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ), ಕೊಡಗು ಜಿಲ್ಲೆ, ಮಡಿಕೇರಿ.

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಪೊನ್ನಂಪೇಟೆ.

1) ಕೆ.ಎಲ್. ಪ್ರಭಾಕರ ತಂದೆ ಪೌತಿ ಲಿಂಗಪ್ಪ, ಕಡಂಗ, ಅರಪಟ್ಟು ಗ್ರಾಮ.
2) ಕೆ.ಪಿ. ಗಣೇಶ, ತಂದೆ ಪ್ರಭಾಕರ, ಅರಪಟ್ಟು-ಗ್ರಾಮ.
3) ಲಿಂಗಾಯಿತರ ಮಹದೇವ, ತಂದೆ ಕರೀಗೌಡ, ಮೈಸೂರು.
4) ಲಿಂಗಾಯಿತರ ಸ್ವಾಮಿ, ತಂದೆ ಬಸವರಾಜು, ಮೈಸೂರು.
5) ಕಾದಿರ ಉಮೇಶ, ಪಾರಾಣೆ ಗ್ರಾಮ, ವಿರಾಜಪೇಟೆ ತಾಲ್ಲೂಕು.

**ವಾಹನದ ಮಾಲೀಕರು:**
ಎ. ಜಾನ್ಸಿ ಕಿರಣ್, ಗಂಡ ಎ.ಎಸ್. ಕಿರಣ್, ಕಿರಂದಾಡು ಗ್ರಾಮ, ಪಾರಣೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 8.1.2004 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಫಿರ್ಯಾದುದಾರರು ತಮ್ಮ ಸಿಬ್ಬಂದಿ ಸಮೇತ ವಾಹನವನ್ನು ತಪಾಸಣೆ ಮಾಡುತ್ತಿರುವಾಗ ಬೆಳಿಗ್ಗೆ 6.00 ಗಂಟೆಗೆ ಹುಣಸೂರು ಕಡೆಯಿಂದ ಲಾರಿ ಸಂಖ್ಯೆ: ಕೆಎ-21-2094 ಬರುತ್ತಿರುವುದನ್ನು ಕಂಡು ಸಂಶಯದ ಮೇರೆಗೆ ನಿಲ್ಲಿಸಿ ವಿಚಾರಿಸಿದಾಗ ಅದರ ಚಾಲಕ ಸಗಣಿ ಲೋಡ್ ಎಂದು ತಿಳಿಸಿರುತ್ತಾನೆ. ಸಂಶಯದ ಮೇರೆಗೆ ಸಗಣಿ ಲೋಡಿನ ಮೇಲೆ ತಪಾಸಣೆ ಮಾಡಿ ಕಬ್ಬಿಣದ ರಾಡನ್ನು ಚುಚ್ಚಿದಾಗ ಹಸಿ ಸಗಣಿ ಗೊಬ್ಬರದೊಳಗಿನಿಂದ ಸಾರಾಯಿ ವಾಸನೆ ಕಂಡು ಬಂದು ಕೂಡಲೇ ಲಾರಿಯಲ್ಲಿದ್ದ ಚಾಲಕ ಹಾಗೂ ಸಹಾಯಕರನ್ನು ವಿಚಾರಿಸಿದಾಗ ಲಾರಿಯ ಲೋಡಿನ ಒಳಗಡೆ ಸಾರಾಯಿ ಪ್ಯಾಕೇಟುಗಳಿರುವುದು ಎಂದು ತಿಳಿಸಿರುತ್ತಾರೆ. ಸದರಿ ಸಾರಾಯಿ ಪ್ಯಾಕೇಟುಗಳನ್ನು ಎಲ್ಲಿಂದ ತಂದಿರುವುದಾಗಿ ಹಾಗೂ ಯಾರು ಕೊಟ್ಟಿದ್ದಾರೆಂದು ಕೂಲಂಕುಷವಾಗಿ ವಿಚಾರಿಸಿದಾಗ ತಾನು ಹುಣಸೂರಿನಲ್ಲಿ ವಿರಾಜಪೇಟೆ ತಾಲ್ಲೂಕಿನ ರಮೇಶ್ ಎಂಬುವರು ಹುಣಸೂರಿನ ಗುರುಪುರಕ್ಕೆ ಹೋಗುವ ದಾರಿಯಲ್ಲಿ ಲೋಡು ಮಾಡಿಸಿ ಕಳುಹಿಸಿರುವುದಾಗಿ ತಿಳಿಸಿರುತ್ತಾನೆ. ಲಾರಿಯಲ್ಲಿದ್ದ ಚಾಲಕನ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ತಾನು ಕೆ.ಎಲ್. ಪ್ರಭಾಕರ ಹಾಗೂ ಕ್ಲೀನರ್ ಕೆ.ಪಿ. ಗಣೇಶ್ ಮತ್ತು ಸಹಾಯಕರಾದ ಮಹದೇವ, ಸ್ವಾಮಿ ಎಂದು ತಿಳಿಸಿರುತ್ತಾರೆ.

ನಂತರ ಹಸಿ ಗೊಬ್ಬರವನ್ನು ತೆಗೆಯಲಾಗಿ ಲಾರಿಯ ಮಧ್ಯಭಾಗದಲ್ಲಿ ಒಂದು ಚೀಲದಲ್ಲಿ ತಲಾ 100 ಎಂ.ಎಲ್X100 ಸಾರಾಯಿ ಪ್ಯಾಕೇಟುಗಳಿದ್ದು ಒಟ್ಟು 48 ಚೀಲಗಳಲ್ಲಿ 100 ಎಂಎಲ್‌ನ 14,400 ಸಾರಾಯಿ ಪ್ಯಾಕೇಟುಗಳು ಇರುತ್ತದೆ. ಲಾರಿಯ ಚಾಲಕ ಹಾಗೂ ಸಹಾಯಕರಲ್ಲಿ ಸಾರಾಯಿ ಸಾಗಾಣಿಕೆ ಮಾಡಲು ರಹದಾರಿ ಪತ್ರ ಇದೆಯೇ ಎಂದು ವಿಚಾರಿಸಿದಾಗ ತನ್ನ ಬಳಿ ಯಾವುದೇ ರಹದಾರಿ ಪತ್ರ ಇಲ್ಲವೆಂದು ತಿಳಿಸಿದ ಮೇರೆಗೆ ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34 ರ ಪ್ರಕಾರ ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಸಾರಾಯಿ ಸ್ಯಾಚೀಟುಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ಲಾರಿಯನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು ಮತ್ತು ಸ್ಥಳದಲ್ಲಿದ್ದ ಆರೋಪಿಗಳನ್ನು ದಸ್ತಗಿರಿ ಮಾಡಿ ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ 3/2004 ರಂತೆ ನೋಂದಾಯಿಸಿ ಸ್ವತ್ತುಗಳ ಪಟ್ಟಿ ತಯಾರಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣಕ್ಕೆ ಸಂಬಂಧಪಟ್ಟ ಪಂಚನಾಮೆಯ ಪ್ರತಿ, ಪ್ರಥಮ ವರ್ತಮಾನದ ಪ್ರತಿ ಹಾಗೂ ಸ್ವತ್ತಿನ ಪಟ್ಟಿಯ ಪ್ರತಿಯನ್ನು ಫಿರ್ಯಾಧಿನೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ ಪ್ರಕರಣದ ಸ್ವತ್ತುಗಳನ್ನು ಹಾಗೂ ದಾಖಲೆ ಪತ್ರಗಳನ್ನು ಮುಂದಿನ ತನಿಖೆ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಪೊನ್ನಂಪೇಟೆ, ಉಪವಲಯ ಇವರಿಗೆ ದಿನಾಂಕ: 18.1.2004 ರಂದು ಹಸ್ತಾಂತರಿಸಲು ಆದೇಶ ನೀಡಲಾಗಿದೆ.

ಸದರಿ ಹಸ್ತಾಂತರ ಪಡೆದ ಅಬಕಾರಿ ಉಪ ನಿರೀಕ್ಷಕರು, ಪೊನ್ನಂಪೇಟೆ ಉಪ ವಲಯ ಇವರು ತನಿಖೆಯನ್ನು ಪ್ರಾರಂಭಿಸಿ ಸಾರಾಯಿಯಿಂದ ಮಾದರಿಗಾಗಿ ತೆಗೆದ ಸಾರಾಯಿ ಸ್ಯಾಂಪಲ್‌ಗಳನ್ನು ವಿಭಾಗೀಯ ಸಾರ್ವಜನಿಕ ವಿಶ್ಲೇಷಕರು ಹಾಗೂ ವಲಯ ಸಹಾಯಕ ರಸಾಯನ ಪರೀಕ್ಷಕರು, ಮೈಸೂರು ವಿಭಾಗ, ಮೈಸೂರು ಇವರಿಗೆ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸದರಿಯವರ ಪತ್ರ ಸಂಖ್ಯೆ: ಇ85/4 ದಿನಾಂಕ: 5.8.2004 ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 31.49% 30.01% ಮತ್ತು 30.16% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಇದರಂತೆ ಅಬಕಾರಿ ಉಪ

ನಿರೀಕ್ಷಕರು, ಪೊನ್ನಂಪೇಟೆ, ಉಪವಲಯ ಇವರ ತನಿಖಾ ವರದಿ ಸಂಖ್ಯೆ 3/2004-05 ದಿನಾಂಕ: 20.9.2004 ರಂದು ಸಾರಾಯಿ ಸ್ಯಾಚೇಟುಗಳು ಗಾಳಿ ತುಂಬಿ ದಪ್ಪ ಆಗಿದ್ದು ಇದನ್ನು ಕಛೇರಿಯಲ್ಲಿ ಇಟ್ಟುಕೊಳ್ಳಲು ಸ್ಥಳ ಇಲ್ಲದೆ ಇರುವುದರಿಂದ ಹಾಗೂ ಸಾರಾಯಿ ಸಾಂದ್ರತೆ ಪ್ರಮಾಣ ಕಡಿಮೆ ಇರುವುದರಿಂದ ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ತನಿಖಾವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ, ಇವರ ಕಛೇರಿ ನಡವಳಿ ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:158/2003-04, ದಿನಾಂಕ: 22.9.2004 ರಂದು ವಶಪಡಿಸಿಕೊಂಡ 100X14,396 ಸಾರಾಯಿ ಪ್ಯಾಕೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿರುತ್ತದೆ.

ವಾಹನದ ನೋಂದಣಿ ಮಾಲೀಕರಾದ ಶ್ರೀಮತಿ ಎ. ಜಾನ್ಸಿಕಿರಣ್, ಕೋಂ ಎ.ಎಸ್. ಕಿರಣ್, ಕಿರುಂದಾಡು ಗ್ರಾಮ, ಪಾರಾಣೆ ಅಂಚೆ, ವಿರಾಜಪೇಟೆ ತಾಲ್ಲೂಕು ರವರು ತಮ್ಮ ವಕೀಲರ ಮೂಲಕ ಈ ಪ್ರಾಧಿಕಾರಕ್ಕೆ ದಿನಾಂಕ: 15.6.2004 ರಂದು ಅರ್ಜಿ ಸಲ್ಲಿಸಿ ತಾನು ವಾಹನದ ನೋಂದಣಿ ಮಾಲೀಕಳಾಗಿರುವುದಾಗಿ ಹಾಗೂ ವಾಹನವನ್ನು ತನ್ನ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಡಿಕೇರಿ ಕೊಡಗು ಜಿಲ್ಲೆ ಇವರ ಪತ್ರ ಸಂಖ್ಯೆ ದಿನಾಂಕ: 19.6.2004 ರಲ್ಲಿ ಸಲ್ಲಿಸಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕಳು ಶ್ರೀಮತಿ ಎ. ಜಾನ್ಸಿಕಿರಣ್ ಕೋಂ ಎ.ಎಸ್. ಕಿರಣ್, ಕಿರುಂದಾಡು ಗ್ರಾಮ, ಪಾರಾಣೆ ಅಂಚೆ, ವಿರಾಜಪೇಟೆ ತಾಲ್ಲೂಕು ಎಂದು ತಿಳಿಸಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ ವಾಹನದ ಮಾಲೀಕಳಾದ ಶ್ರೀಮತಿ ಎ. ಜಾನ್ಸಿಕಿರಣ್ ಹಾಗೂ ಆರೋಪಿಗಳಿಗೆ ಕರ್ನಾಟಕ ಅಬಕಾರಿ ಕಾಯಿದೆ ನಿಯಮ 43(ಬಿ)ರ ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿನಾಂಕ: 1.9.2004 ರಂದು ನೀಡಲಾಗಿದ್ದು, ಸದರಿ ನೋಟೀಸ್‌ನಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಬಿ)ರ ಪ್ರಕಾರ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟೀಸ್ ಅನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ಸ್ವೀಕೃತಿಯಾಗಿ ಸ್ವೀಕೃತಿ ಪತ್ರ ದಿನಾಂಕ: 1.9.2004 ರಂದು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ಕಾರಣ ಕೇಳಿ ನೀಡಿರುವ ಈ ನೋಟೀಸ್ ತಲುಪಿದ 7 ದಿನಗಳೊಳಗೆ ತಮ್ಮದೇನಾದರೂ ಉತ್ತರ ಇದ್ದಲ್ಲಿ ಈ ಪ್ರಾಧಿಕಾರಕ್ಕೆ ಹಾಜರಾಗಿ ಉತ್ತರವನ್ನು ಸಲ್ಲಿಸಲು ಕೋರಿದ್ದು, ವಾಹನದ ಮಾಲೀಕರು ಕಾರಣ ಕೇಳಿ ನೋಟೀಸ್‌ನ್ನು ಸ್ವೀಕರಿಸಿದ್ದು ಒಂದು ತಿಂಗಳು ಕಳೆದಿದ್ದರೂ ಸದರಿ ಮಾಲೀಕರಾಗಲಿ, ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಯಾವುದೇ ಅರ್ಜಿಯನ್ನು ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಹಾಜರು ಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡುಬರುತ್ತದೆ. ಅಲ್ಲದೆ ವಾಹನವನ್ನು ಪಡೆಯಲು ಮತ್ತು ತಕ್ರೀರು ನಡೆಸಲು ಉತ್ಸುಕರಿಲ್ಲ ಎಂಬುವುದಾಗಿ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

ಸದರಿ ಆರ್.ಸಿ. ಮಾಲೀಕರ ಪರವಾಗಿ ವಕೀಲರು ದಿನಾಂಕ: 15.6.2004 ರಂದು ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಿ ವಾಹನದ ಮಾಲೀಕರಿಗೆ ವಿಚಾರಣೆಯ ದಿನಾಂಕವನ್ನು ದಿನಾಂಕ: 4.11.2004 ರಂದು ನೀಡಲಾಗಿತ್ತು. ಸದರಿ ದಿನಾಂಕದಂದು ವಿಚಾರಣೆಯನ್ನು ನಡೆಸಲಾಗಿರುವುದಿಲ್ಲ. ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿ ಯಾವುದೇ ವಿಚಾರಣೆ ನಿಗದಿಯಾಗಿರುವುದಿಲ್ಲ. ಈ ಮಧ್ಯೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ:212:ಇಪಿಎಸ್:2004, ದಿನಾಂಕ: 5.5.2005 ರಲ್ಲಿನ ಆದೇಶದಂತೆ 43(ಎ) ನಡವಳಿ ಪ್ರಾಧಿಕಾರವನ್ನು ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಇವರಿಗೆ ಅಧಿಕಾರವನ್ನು ನೀಡಲಾಗಿದ್ದು, ಈ ಕಡತವನ್ನು ಅಬಕಾರಿ ಉಪ ಆಯುಕ್ತರು ಹಾಗೂ ಅಧಿಕೃತ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರ ಪ್ರಾಧಿಕಾರದಿಂದ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ ಇವರ ಪ್ರಾಧಿಕಾರಕ್ಕೆ ದಿನಾಂಕ: 10.8.2005 ರಂದು ಹಸ್ತಾಂತರಿಸಲಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ ಇವರ ಪ್ರಾಧಿಕಾರದಲ್ಲಿ ದಿನಾಂಕ: 26.11.2005 ರಂದು ವಿಚಾರಣೆಗೆ ದಿನಾಂಕವನ್ನು ನಿಗದಿಪಡಿಸಿ ಆರ್.ಸಿ. ಮಾಲೀಕರಿಗೆ ಹಾಗೂ ಸಾಕ್ಷಿಗಳಿಗೆ ನೋಟೀಸ್ ನೀಡಲಾಗಿತ್ತು. ಆರ್.ಸಿ. ಮಾಲೀಕರು ಹಾಗೂ ಅವರ ಪರ ವಕೀಲರು ಹಾಜರಾಗಿದ್ದು, ಕಾರಣ ಕೇಳಿ ನೋಟೀಸ್‌ಗೆ ಉತ್ತರ ನೀಡಲು ಕಾಲಾವಕಾಶವನ್ನು ಕೋರಿರುತ್ತಾರೆ. ಹಾಗೂ ಸಾಕ್ಷಿಗಳು ಹಾಜರಾಗದ ಕಾರಣ ವಿಚಾರಣೆಯನ್ನು ದಿನಾಂಕ: 22.12.2005ಕ್ಕೆ ನಿಗದಿಪಡಿಸಲಾಗಿತ್ತು. ಈ ದಿನಾಂಕದಂದು ಕಾರಣಾಂತರದಿಂದ ವಿಚಾರಣೆಯನ್ನು ಮುಂದೂಡಿ ದಿನಾಂಕ: 7.1.2006ಕ್ಕೆ ಪ್ರಕರಣವನ್ನು ಕರೆಯಲಾಯಿತು. ಸರ್ಕಾರದ ಪರ ಸಾಕ್ಷಿಗಳು ಹಾಜರಾಗಿರುವುದಿಲ್ಲ. ಸರ್ಕಾರದ ಪರ ವಾದ ವಿವಾದವನ್ನು ನಡೆಸಿಕೊಡಲು ಸಹಾಯಕ ಸರ್ಕಾರಿ ಅಭಿಯೋಜಕರು ಹಾಜರಿದ್ದು, ಆರ್.ಸಿ. ಮಾಲೀಕರ ಪರ ವಕೀಲರು ಅರ್ಜಿಯನ್ನು ಸಲ್ಲಿಸಿ ದಿನಾಂಕ: 15.6.2004 ರಂದು ಜಪ್ತಾದ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯ ಬಗ್ಗೆ ಯಾವುದೇ ಬೇಡಿಕೆ ಇಲ್ಲವೆಂದು ಮನವಿ ಸಲ್ಲಿಸಿರುತ್ತಾರೆ. ಪ್ರಕರಣದ ಸಾಕ್ಷಿಗಳು ಹಾಜರಿಲ್ಲದ ಕಾರಣ ಅಂತಿಮ ವಿಚಾರಣೆಯನ್ನು ದಿನಾಂಕ: 19.1.2006ಕ್ಕೆ ಮುಂದೂಡಲಾಯಿತು. ಆ ದಿನ ಸರ್ಕಾರದ ಪರ ಎ.ಡಿ.ಪಿ. ಯವರು ಉಪಸ್ಥಿತರಿದ್ದು ವಾಹನದ ಆರ್.ಸಿ. ಮಾಲೀಕರಾದ ಶ್ರೀಮತಿ ಜಾನ್ಸಿ ಕಿರಣ್ ಇವರ ಪತಿಯವರಾದ ಶ್ರೀ ಎ.ಎಸ್. ಕಿರಣ್ ಇವರು ಹಾಜರಿರುತ್ತಾರೆ. ಆರ್.ಸಿ. ಮಾಲೀಕರು ದಿನಾಂಕ: 7.1.2006 ರಂದು ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿ ವಾಹನದ ಪರವಾಗಿ ಇನ್ನು ಮುಂದೆ ಯಾರೂ ಹಕ್ಕು ಚಲಾಯಿಸದೆ ಇರುವುದರಿಂದ ಮತ್ತು ಸೂಕ್ತ ಸಾಕ್ಷ್ಯಾಧಾರಗಳನ್ನು ಹಾಜರು ಪಡಿಸದೆ ಇರುವುದರಿಂದ ಸರ್ಕಾರದ ಪರ ಸಾಕ್ಷಿಗಳ ವಿಚಾರಣೆಯನ್ನು ಕೈಬಿಟ್ಟು ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಲಾಯಿತು.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಮತ್ತು ವಾಹನ ಮಾಲೀಕರು ಮಧ್ಯಂತರ ಬಿಡುಗಡೆಗೆ ಕೋರಿದ ಅರ್ಜಿಯನ್ನು ಹಿಂದಕ್ಕೆ ಪಡೆದು ಪ್ರಾಧಿಕಾರದ ಯಾವುದೇ ವಿಲೇವಾರಿಗೆ ಒತ್ತಾಯಿಸಿರುವುದಿಲ್ಲವಾದ್ದರಿಂದ ಸದರಿಯವರು ಸೂಕ್ತ ಸಾಕ್ಷ್ಯಾಧಾರಗಳನ್ನು ಪ್ರಾಧಿಕಾರಕ್ಕೆ ಹಾಜರು ಪಡಿಸಲು ವಿಫಲರಾಗಿರುತ್ತಾರೆ. ಮತ್ತು ದಿನಾಂಕ: 8.1.2004 ರಂದು ಪೊಲೀಸ್ ಉಪ ನಿರೀಕ್ಷಕರು, ಪೊನ್ನಂಪೇಟೆ ಪೊಲೀಸ್ ಠಾಣೆ ಇವರು ವಾಹನದಲ್ಲಿ ಹಸಿ ಸೆಗಣಿ ಲೋಡಿನೊಳಗೆ ಅಕ್ರಮ ಸಾರಾಯಿ ಸಾಗಾಣಿಕೆ ಮಾಡುತ್ತಿರುವಾಗ ಸ್ಥಳ ಮಹಜರಿನ ಮೂಲಕ ವಾಹನವನ್ನು ಜಪ್ತು ಪಡಿಸಿರುವುದು ಹಾಗೂ ರಾಸಾಯನಿಕ ತಜ್ಞರ ಪ್ರಕಾರ ಜಪ್ತುಪಡಿಸಲಾದ ಪದಾರ್ಥವು ಸಾರಾಯಿ ಎಂದು ದೃಢೀಕರಿಸಿರುವುದು ಮತ್ತು ಅಕ್ರಮ ಸಾರಾಯಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಈ ಎಲ್ಲಾ ದಾಖಲಾತಿಗಳಿಂದ ಸಾಬೀತಾಗಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965, ಕಲಂ 43 ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಹಾಗೂ ವಾಹನಕ್ಕೆ ಸಂಬಂಧಪಟ್ಟವರು ಅರ್ಜಿಯನ್ನು ಕೈಬಿಟ್ಟಿರುವುದರಿಂದ ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಸದರಿ ವಾಹನವನ್ನು ವಶಪಡಿಸಿಕೊಂಡು ಇಂದಿಗೆ ಸುಮಾರು 17 ತಿಂಗಳುಗಳು ಕಳೆದಿದ್ದು, ತೆರೆದ ಬಯಲು ಪ್ರದೇಶದಲ್ಲಿ ವಾಹನವನ್ನು ನಿಲ್ಲಿಸಿದ್ದರಿಂದ ಚಾಲನೆಯ ಸ್ಥಿತಿ ಇಲ್ಲದೆ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಹಾಳಾಗಿ ಹೋಗುವ ಸಾಧ್ಯತೆಗಳಿದ್ದು, ಕೊಡಗಿನಲ್ಲಿ ಹೆಚ್ಚು ಮಳೆ ಬೀಳುವುದರಿಂದ ಹವಾಮಾನದ ವೈಪರೀತ್ಯಕ್ಕೆ ವಾಹನದ ಬಹುತೇಕ ಭಾಗಗಳು ಹಾಳಾಗುವ ಸಂಭವವಿರುವುದರಿಂದ ಇನ್ನು ಹೆಚ್ಚು ಸಮಯ ಇರಿಸಿಕೊಂಡರೆ ಇನ್ನಷ್ಟು ಭಾಗಗಳು ಶಿಥಿಲಗೊಂಡು ಸರ್ಕಾರಕ್ಕೆ ಬರುವ ಆದಾಯವು ಕಡಿಮೆಯಾಗುವ ಸಂಭವವಿರುವುದರಿಂದ ಮಧ್ಯಂತರ ಬಿಡುಗಡೆಗೆ ಸಲ್ಲಿಸಿದ ಅರ್ಜಿಯನ್ನು ವಾಹನದ ಮಾಲೀಕರು ಹಿಂದಕ್ಕೆ ಪಡೆದುಕೊಂಡಿರುವುದರಿಂದ ಸದರಿ ವಾಹನಕ್ಕೆ ಸಂಬಂಧಪಟ್ಟವರು ಯಾರೂ ಇನ್ನು ಮುಂದೆ ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸುವುದು ಇಲ್ಲವಾದ್ದರಿಂದ ಲಾರಿ ಸಂಖ್ಯೆ: ಕೆಎ-21-2094 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಎ)(2)ರ ಅನ್ವಯ ಪೊಲೀಸ್ ಉಪ ನಿರೀಕ್ಷಕರು, ಪೊನ್ನಂಪೇಟೆ ಪೊಲೀಸ್ ಠಾಣೆ, ಇವರ ಮೊಕದ್ದಮೆ ಸಂಖ್ಯೆ: 3/2004-05 ದಿನಾಂಕ: 8.1.2004 ರಂದು ಜಪ್ತು ಪಡಿಸಿರುವ ಲಾರಿ ಸಂಖ್ಯೆ: ಕೆಎ-21-2094ರ ವಾಹನದ ಮಾಲೀಕರು ತಮ್ಮ ವಕೀಲರ ಮೂಲಕ ದಿನಾಂಕ: 15.6.2004 ರಂದು ಸಲ್ಲಿಸಿದ ಅರ್ಜಿಯನ್ನು ಕೈಬಿಟ್ಟು ದಿನಾಂಕ: 7.1.2005 ರಂದು ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿ ವಾರಸುದಾರರಿಲ್ಲದ ಸ್ವತ್ತೆಂದು ಪರಿಗಣಿಸಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಕೆಎ-21-2094 ರನ್ನು ಕರ್ನಾಟಕ ಅಬಕಾರಿ ಕಾಯಿದೆ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಅಧೀಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಆದೇಶ ಸಮ ಸಂಖ್ಯೆ ದಿನಾಂಕ: 22.9.2004 ರಲ್ಲಿ ವಶಪಡಿಸಿಕೊಂಡ 100 ಎಂ.ಎಲ್.X14.396 ಸಾರಾಯಿ ಪ್ಯಾಕೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿರುತ್ತದೆ. ಸಾರಾಯಿ ಪ್ಯಾಕೇಟುಗಳು ಉಬ್ಬಿಕೊಂಡು ದಪ್ಪವಾಗಿದ್ದು ಹಾಗೂ ಅಧಿಕೃತ ಸಾರಾಯಿ ಸಂಸ್ಥೆಯಿಂದ ತಯಾರಾಗುವ ಬಗ್ಗೆ ಯಾವುದೇ ಪುರಾವೆಗಳು ಕಂಡುಬಾರದ ಕಾರಣ ಇದನ್ನು ಸಾರ್ವಜನಿಕರಿಗೆ ವಿತರಿಸಲು ಸಾಧ್ಯವಾಗದ ಕಾರಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿ ಪ್ಯಾಕೇಟುಗಳನ್ನು ನಿಯಮ 43ಎ(2) ರನ್ವಯ ಅಬಕಾರಿ ಉಪ ಅಧೀಕ್ಷಕರು, ಪ್ರಭಾರ ವಿರಾಜಪೇಟೆ ಉಪ ವಿಭಾಗ ಇವರ ಸಮಕ್ಷಮ ಮಹಜರ್ ಜರುಗಿಸಿ ನಾಶಪಡಿಸಲು ಆದೇಶ ನೀಡಿರುತ್ತೇನೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 20.2.2006 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 572

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್-3/2006, ದಿನಾಂಕ: 20ನೇ ಫೆಬ್ರವರಿ 2006**

**ಅರ್ಜಿದಾರರು:**
1) ಮಂಜಪ್ಪ, 2) ಜಯಮ್ಮ
ಕಲ್ಲಗುತ್ತಿ, ಬಡಾವಣೆ, ಹೊಸದುರ್ಗ ಟೌನ್.

**ಪ್ರತಿವಾದಿಗಳು:**
1) Assistant Director,
Karnataka Land Army, Behind JMIT College,
Chitradurga.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಮಂಜಪ್ಪ, ಜಯಮ್ಮ ಇವರು, ತಾವು ಮೃತ ಕೃಷ್ಣಪ್ಪ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೃಷ್ಣಪ್ಪ ಇವರು ಒಂದನೇ ಪ್ರತಿವಾದಿಗಳಾದ ಕರ್ನಾಟಕ ಲ್ಯಾಂಡ್ ಆರ್ಮಿ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 574

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ
## ಪ್ರಿಲಿಮಿನರಿ ಅಧಿಸೂಚನೆ
### ಸಂಖ್ಯೆ: ಎಡಿಎಂ:ಸಿಆರ್:199:2005-2006, ದಿನಾಂಕ: 23ನೇ ಫೆಬ್ರವರಿ 2006

ಕೋಲಾರ ಜಿಲ್ಲೆ ಶಿಡ್ಲಘಟ್ಟ ಪಟ್ಟಣದ ಕಾರ್ಮಿಕ ಕಾಲೋನಿ-3ರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ವಾಸದ ಮನೆಗಳಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳು ದುರಸ್ತಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು ಜನ ಸಂದಣಿಯಿಂದ ಕೂಡಿದ್ದು ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನಾ ಕಾಯ್ದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿದೆ.

ಆದುದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ (ಕರ್ನಾಟಕ ಕಾಯ್ದೆ 33ರ 1971ರ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಯುಡಿ 44 ಎಂಎಸ್‌ಸಿ 84, ದಿನಾಂಕ: 17.4.1998ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ರಿಸಿಲ್ವಾರ್ ರಸ್ತೆ, ಬೆಂಗಳೂರು ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ ಎ.ಗುಂ. | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1 | ಕಾರ್ಮಿಕ ಕಾಲೋನಿ-3 ಶಿಡ್ಲಘಟ್ಟ | ಪುರಸಭೆ ಶಿಡ್ಲಘಟ್ಟ | 1) 82, 83, 77 ಮತ್ತು 78ರ ಮಧ್ಯೆ ಇರುವ ಹದ್ದುಗಿಡದ ಹಳ್ಳದ ಖರಾಬ್ | 0.14 | ಸ.ನಂ.77, 78, ಹಿಡುವಳಿ ಜಮೀನುಗಳು | 82, 83, ಹಿಡುವಳಿ ಜಮೀನುಗಳು | ಸರ್ಕಾರಿ ಖರಾಬು ಹಳ್ಳ | ಸರ್ಕಾರಿ ಖರಾಬು ಹಳ್ಳ |
| | | | 2) 79/1, 79/2, 80/1, 80/2, 81/1, 81/2 ರಲ್ಲಿ ಇರುವ ರಿಸರ್ವ್ಡ್ ಹಳ್ಳದ ಖರಾಬ್ | 0.33 | 79, 80, 81ರ ಉಳಿಕೆ ಜಮೀನು | 79,80, 81ರ ಉಳಿಕೆ ಜಮೀನು | ” | ” |
| | | | 3) 64/3, 64/5, 65, 66, 67, 68, 72 ನಂ.ಗಳ ಮಧ್ಯೆ ಇರುವ ಹದ್ದುಗಿಡದ ಹಳ್ಳದ ಖರಾಬ್ | 0.39 | 66, 67, 68, 72ರ ಹಿಡುವಳಿ ಜಮೀನುಗಳು | 64, 65ರ ಹಿಡುವಳಿ ಜಮೀನು | ” | ” |
| | | | 4) 64/4, 64/5 ರಲ್ಲಿ ಇರುವ ರಿಸರ್ವ್ಡ್ ಹಳ್ಳದ ಖರಾಬ್ | 0.20 | 64/4, 64/5ರ ಉಳಿಕೆ ಜಮೀನು | 64/4ರ ಉಳಿಕೆ ಜಮೀನು | ” | ” |
| | | | 5) 62, 63ರ ಮಧ್ಯೆ ಇರುವ ನಂ. ಕಾಣದ ಹಳ್ಳದ ಖರಾಬ್ | 0.09 | 62ರ ಹಿಡುವಳಿ ಜಮೀನು | 63ರ ಹಿಡುವಳಿ ಜಮೀನು | ” | ” |
| | | | **ಒಟ್ಟು** | **2-35** | | | | |

ಪಿ.ಆರ್. 577

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ
### ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್-ಸಿಆರ್/2/2006, ದಿನಾಂಕ: 20ನೇ ಫೆಬ್ರವರಿ 2006

**ಅರ್ಜಿದಾರರು:**

1) ಮಹಬೂಬ್ ಉರುಫ್ ಮಹಬೂಬಿ
ಕೂನಿಕೆರೆ ಗ್ರಾಮ, ಹಿರಿಯೂರು (ತಾ)

**ಪ್ರತಿವಾದಿಗಳು:**

1) ಕಂದಸ್ವಾಮಿ, ಮನಪಲ್ಲಿ ಗ್ರಾಮ, ನಮಕ್ಕಲ್ ಜಿಲ್ಲೆ.
2) ಮಾಲೀಕರು, ಆರ್.ಕೆ. ಪವರ್‌ಜೆನ್, ಹಿರಿಯೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಮಹಬೂಬ್ ಇವರು, ತಾವು ಮೃತ ಕೆ.ಬಾಬು ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೆ.ಬಾಬು ಇವರು ಒಂದನೇ ಪ್ರತಿವಾದಿಗಳಾದ ಕಂದಸ್ವಾಮಿ ಇವರಲ್ಲಿ ಸಹಾಯಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 575

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ರಾಯಚೂರು ತಾಲ್ಲೂಕು, ರಾಯಚೂರು ಜಿಲ್ಲೆ**

**ಅಧಿಸೂಚನೆ ಸಂಖ್ಯೆ: ತಾಸಕಅರಾ:ಸಿಬ್ಬಂದಿ:ಸಿಆರ್:2005-06, ದಿನಾಂಕ: ಫೆಬ್ರವರಿ 2006**

**ವಿಷಯ :** ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ ಕೇಂದ್ರದ ಅಧಿನಿಯಮ 22ರ ಜಾರಿಗೆ ತರುವ ಕುರಿತು.

**ಉಲ್ಲೇಖ :** ಸಂಖ್ಯೆ: ಜಿಸಕಅರಾ:ಸಿಬ್ಬಂದಿ:ಸಿಆರ್:68:2005-06:954, ದಿನಾಂಕ: 25.10.2005.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ 2005) ರನ್ವಯ ಸೆಕ್ಷನ್ 5(1) 5(2) ಮತ್ತು 19(1)ರ ಸೂಚನೆಯಂತೆ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯವು ಅಜಾದನಗರ ಮಾವಿನ ಕೆರೆಯ ಕೆಳಗಡೆ ಸ್ಟೇಷನ್ ರಸ್ತೆ ರಾಯಚೂರಿನಲ್ಲಿ ನೆಲೆಗೊಂಡಿದೆ. ಶ್ರೀ ಆನಂದ ಕೆ.ಬಿ.ರವರು ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಮುಖ್ಯಸ್ಥರಾಗಿರುತ್ತಾರೆ. ಅವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಅಧೀಕ್ಷಕರು
2) ಪ್ರಥಮ ದರ್ಜೆ ಸಹಾಯಕರು
3) ದ್ವಿತೀಯ ದರ್ಜೆ ಸಹಾಯಕರು
4) ಬೆರಳಚ್ಚುಗಾರರು
5) ಪರಿಚಾರಕರು.

**ಸೂಚನೆ: ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು:**

1) ಡಾ: ಬಿ.ಆರ್. ಅಂಬೇಡ್ಕರ್ ಮೆಟ್ರಿಕ್ ನಂತರ ಕಾಲೇಜ್ ಬಾಲಕರ ವಿದ್ಯಾರ್ಥಿನಿಲಯ, ರಾಯಚೂರು, ಆಕಾಶವಾಣಿ ಕೇಂದ್ರ ಹತ್ತಿರ, ಎರಗೇರಾ ರೋಡ್, ರಾಯಚೂರು.
2) ಮೆಟ್ರಿಕ್ ನಂತರ ಬಾಲಕೀಯರ ವಿದ್ಯಾರ್ಥಿನಿಲಯ ರಾಯಚೂರು ಹಳೆ ನಂದಿನಿ ಆಸ್ಪತ್ರೆ ಕಟ್ಟಡದಲ್ಲಿ ಸ್ಟೇಷನ್ ರೋಡ್, ರಾಯಚೂರು.
3) ವೃತ್ತಿಪರ ಬಾಲಕರ ವಿದ್ಯಾರ್ಥಿನಿಲಯ ರಾಯಚೂರು ಆಶಾಪೂರು ರೋಡ್, ತಾಯಮ್ಮ ಗುಡಿ ಹತ್ತಿರ, ರಾಯಚೂರು.
4) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ರಾಯಚೂರು, ರಾಮಲಿಂಗೇಶ್ವರ ದೇವಾಲಯ ಎದುರುಗಡೆ ಸ್ಟೇಷನ್ ಐ.ಬಿ.ರೋಡ್, ರಾಯಚೂರು.
5) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಯಾಪಲದಿನ್ನಿ, ತಾ: ರಾಯಚೂರು.
6) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಚೀಗರಕಲಿ, ತಾ: ರಾಯಚೂರು.
7) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ದೇವನಪಲ್ಲಿ, ತಾ: ರಾಯಚೂರು.
8) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮಟಮಾರಿ, ತಾ: ರಾಯಚೂರು.
9) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕೀಯರ ವಿದ್ಯಾರ್ಥಿನಿಲಯ, ರಾಯಚೂರು, ಸ್ವಾಮಿ ಶರಣಂ ಆಯ್ಯಪ್ಪ ಗುಡಿ ಎದುರುಗಡೆ, ರಾಯಚೂರು.
10) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕೀಯರ ವಿದ್ಯಾರ್ಥಿನಿಲಯ, ಚೀಗರಕಲಿ, ತಾ: ರಾಯಚೂರು.
11) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕೀಯರ ವಿದ್ಯಾರ್ಥಿನಿಲಯ, ಗಂಜಳ್ಳಿ, ತಾ: ರಾಯಚೂರು.
12) ಹೊಲಿಗೆ ತರಬೇತಿ ಕೇಂದ್ರ ರಾಯಚೂರು ಆಜಾದನಗರ ವಾವಿನ ಕೆರೆ ಗಾರ್ಡನ್ ಎದುರುಗಡೆ, ರಾಯಚೂರು.
13) ವಸತಿ ಶಾಲೆ ರಾಯಚೂರು, ಸ್ವಾಮಿ ಶರಣ ಅಯ್ಯಪ್ಪ ಗುಡಿ ಎದುರುಗಡೆ, ರಾಯಚೂರು.
14) ಆಶ್ರಮ ಶಾಲೆ ಬ್ರಹ್ಮಗಲಿ ಖಾನಾಪೂರು ತಾ: ರಾಯಚೂರು.
15) ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ರಾಯಚೂರು ಬಿ.ಆರ್.ಬಿ. ಕಾಲೇಜ್ ಹತ್ತಿರ ಯಂಕಣ್ಣ ಯಾದವ ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು, ರಾಯಚೂರು ಇವರ ಕಟ್ಟಡದಲ್ಲಿ.
16) ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕೀಯರ ವಿದ್ಯಾರ್ಥಿನಿಲಯ, ರಾಯಚೂರು ಸ್ವಾಮಿ ಶರಣ ಅಯ್ಯಪ್ಪ ಸ್ವಾಮಿ ಗುಡಿ ಎದುರುಗಡೆ ಸ್ಟೇಷನ್ ರೋಡ್, ರಾಯಚೂರು.
17) ಪ:ಪಂ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಗುಂಜಳ್ಳಿ, ತಾ: ರಾಯಚೂರು.
18) ಪ:ಪಂ ಆಶ್ರಮ ಶಾಲೆ ಗಿಲ್ಲೇಸೂಗೂರು ತಾ: ರಾಯಚೂರು.
19) ಪ:ಪಂ ಮೆಟ್ರಿಕ್ ನಂತರ ಬಾಲಕೀಯರ ವಿದ್ಯಾರ್ಥಿನಿಲಯ ಅರಬಮೊಹಲ್ಲಾ ನ್ಯಾಯಾಲಯ ಸಂಕೀರ್ಣ ಹತ್ತಿರ ರಾಯಚೂರು.

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ:ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಹೊಲಿಗೆ ತರಬೇತಿ ಹೊಂದಿದ ತರಬೇತಿ ದಾರರಿಗೆ ಹೊಲಿಗೆ ಯಂತ್ರಗಳ ಸರಬರಾಜು
2) ಕಾನೂನು ಪದವೀಧರರಿಗೆ ಧನ ಸಹಾಯ.
3) ಕಟ್ಟಡಗಳ ನಿರ್ವಹಣೆ

4) ರಾಜ್ಯ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
5) ಭಾರತ ಸರ್ಕಾರದ ವಿದ್ಯಾರ್ಥಿ ವೇತನ
6) ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
7) ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆದವರಿಗೆ.
8) ಮಹಿಳೆಯರಿಗೆ ಹೊಲಿಗೆ ತರಬೇತಿ.
9) ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.
10) ಒಂದನೇ ತರಗತಿಯಿಂದ ಐದನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ
11) ಅಸ್ಪೃಶ್ಯಾತಾ ನಿವಾರಣೆ
12) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದವರಿಗೆ ಪರಿಹಾರ
13) ಜಾತಿ ಪರಿಶೀಲನೆ
14) ಅಂತರ್ ಜಾತಿ ವಿವಾಹ ಸಹಾಯ ಧನ
15) ಗ್ರಾಮ ಸಭೆ ನಡೆಸುವುದು ಫಲಾನುಭವಿಗಳನ್ನು ಆಯ್ಕೆ ಮಾಡುವುದು.
16) ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ ಕಾರ್ಯಕ್ರಮಗಳ ಅನುಷ್ಠಾನ.

**ಸೂಚನೆ:** ಮೇಲ್ಕಂಡ ಕಾರ್ಯಕ್ರಮಗಳಲ್ಲಿ ತಾಲ್ಲೂಕು ಮಟ್ಟದ ಇನ್ನಾವುದಾದರೂ ಬೇರೆ ಯೋಜನೆಗಳನ್ನು ಸೇರಿಸಬೇಕಾಗಿದ್ದಲ್ಲಿ ಆ ಬಗ್ಗೆ ಪರಿಶೀಲಿಸಿ ಪ್ರಕಟಿಸುವುದು ಮತ್ತು ಸಂಬಂಧಪಡದೇ ಇರುವ ಯೋಜನೆಗಳನ್ನು ಕೈಬಿಡುವುದು.

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು:** ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**3) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು. ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿಯ ಕೈಪಿಡಿ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಹಣ ಇಮೇಜ್ ತಪಾಸಣೆ ಕಾರ್ಯ.
4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5) ಸರ್ಕಾರವು : ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತ ಗತಿಯಲ್ಲಿ ಪಾಲಿಸುವುದು.
6) ಸಾರ್ವಜನಿಕ ಕುಂದು ಕೊರತೆಗಳ ನಿರ್ವಾಹಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2) ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3) ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿಶೇಷ ಘಟಕ ಯೋಜನೆ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರರನ್ನಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

**ಸೂಚನೆ:** ಮೇಲೆ ನೀಡಿರುವ ಮಾಹಿತಿಗಳು ಕೇವಲ ಮಾದರಿಗಾಗಿ ನೀಡಿದ್ದು, ಇದರಲ್ಲಿ ಇನ್ನೂ ಹೆಚ್ಚಿನ ಮಾಹಿತಿ ನೀಡಬೇಕಾಗಿದ್ದ ಪಕ್ಷದಲ್ಲಿ ಅದನ್ನು ಸೇರಿಸಿ ಹೊರಡಿಸುವುದು ಮತ್ತು ಸಂಬಂಧ ಪಡದ ಮಾಹಿತಿಗಳನ್ನು ಕೈಬಿಡುವುದು.

ಪಿ.ಆರ್. 581 ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು, ರಾಯಚೂರು.